## ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 648 |
| 2 | ಸದಸ್ಯರ ಹೆಸರು | : | ಶ್ರೀ ಲಹರ್ ಸಿಂಗ್ ಸಿರೋಯ (ವಿಧಾನ ಸಭೆಯಿಂದ ಚುನಾಯಿತರಾದವರು) |
| 3 | ಉತ್ತರಿಸುವ ದಿನಾಂಕ | : | 12-03-2016 |
| 4 | ಉತ್ತರಿಸುವವರು | : | ಮಾನ್ಯ ಮುಖ್ಯಮಂತ್ರಿಗಳು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ನಗರದಲ್ಲಿರುವ ಬೀದಿನಾಯಿಗಳ ಸಂಖ್ಯೆ ಎಷ್ಟು; ವಲಯವಾರು ಮಾಹಿತಿಯನ್ನು ನೀಡುವುದು; | ಬೆಂಗಳೂರು ನಗರದಲ್ಲಿರುವ ಬೀದಿನಾಯಿಗಳ ಸಂಖ್ಯೆ: 309972 (ಪಾಲಿಕೆಯ ವತಿಯಿಂದ 2019ರಲ್ಲಿ ನಡೆಸಿದ ಸಮೀಕ್ಷೆಯ ಅಂದಾಜಿನಂತೆ) ಆಗಿದ್ದು, ವಲಯವಾರು ಮಾಹಿತಿಗಳು ಈ ಕೆಳಕಂಡಂತೆ ಇರುತ್ತದೆ. (see table below) |
| ಆ) | ಬೆಂಗಳೂರು ನಗರದಲ್ಲಿರುವ ಬೀದಿನಾಯಿಗಳ ಗಣತಿ ಮಾಡಲು ಸರ್ಕಾರವು ತೆಗೆದುಕೊಂಡಿರುವ ಕ್ರಮಗಳೇನು; (ಪೂರ್ಣ ಮಾಹಿತಿಯನ್ನು ನೀಡುವುದು) | **1.** ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಪಶುಪಾಲನಾ ವಿಭಾಗ, WVS India, Mission Rabies ರವರ ಸಹಭಾಗಿತ್ವದಲ್ಲಿ ಸೆಪ್ಟೆಂಬರ್ 2019ರ ಮಾಹೆಯಲ್ಲಿ ಪಾಲಿಕೆಯ ಎಲ್ಲಾ ವಲಯಗಳಲ್ಲಿ ಮಾದರಿ ಸಮೀಕ್ಷೆ (Sample Survey) ಮಾದರಿಯಲ್ಲಿ ಬೀದಿನಾಯಿಗಳ ಸಮೀಕ್ಷೆ ಕಾರ್ಯವನ್ನು ಕೈಗೊಳ್ಳಲಾಗಿರುತ್ತದೆ.<br>**2.** ಪಾಲಿಕೆಯ ಪಶುಪಾಲನಾ ವಿಭಾಗದಿಂದ 10 Basic Sight Survey ತಂಡಗಳನ್ನು ಮತ್ತು 04 Resight Survey ತಂಡಗಳನ್ನು ರಚಿಸಿ, ಪ್ರತಿ ತಂಡದಲ್ಲಿ 2 ಹಿರಿಯ ಪಶುವೈದ್ಯಕೀಯ ಪರೀಕ್ಷಕರನ್ನು ಸಮೀಕ್ಷಕರನ್ನಾಗಿ ಹಾಗೂ 01 ಸಹಾಯಕ ನಿರ್ದೇಶಕರನ್ನು ಮೇಲ್ವಿಚಾರಣಾ ಅಧಿಕಾರಿಯನ್ನಾಗಿ ನೇಮಿಸಲಾಗಿತ್ತು.<br>**3.** Basic sight Survey ತಂಡದವರು ದಿನಕ್ಕೆ 10 ವಾರ್ಡ್‌ಗಳಂತೆ 20 ದಿನಗಳ ಕಾಲ 198 ವಾರ್ಡ್‌ಗಳ ಸಮೀಕ್ಷೆ ಕಾರ್ಯವನ್ನು ಕೈಗೊಂಡಿರುತ್ತಾರೆ. Resight Survey ತಂಡದವರು ಆಯ್ದ 20 ವಾರ್ಡ್‌ಗಳಲ್ಲಿ ಪ್ರತಿ ವಾರ್ಡ್‌ನಲ್ಲಿ 02 ಬಾರಿ ಸಮೀಕ್ಷೆ ಕಾರ್ಯ ಕೈಗೊಳ್ಳಲಾಗಿದೆ.<br>**4.** ಸಮೀಕ್ಷೆ ಕಾರ್ಯವನ್ನು WVS India, ರವರ WVS Street Dog Survey App ಉಪಯೋಗಿಸಿ GPS ತಂತ್ರಾಂಶವನ್ನು ಬಳಸಿ ಮೊಬೈಲ್ ಮತ್ತು ಟ್ಯಾಬ್‌ಗಳಲ್ಲಿ ಸಮೀಕ್ಷೆ ಕಾರ್ಯ ನಡೆಸಲಾಗಿರುತ್ತದೆ. |

| ಕ್ರ.ಸಂ. | ವಲಯದ ಹೆಸರು | ಬೀದಿನಾಯಿಗಳ ಸಂಖ್ಯೆ |
|---|---|---|
| 1. | ಯಲಹಂಕ | 36217 |
| 2. | ರಾಜರಾಜೇಶ್ವರಿನಗರ | 52961 |
| 3. | ದಾಸರಹಳ್ಳಿ | 23170 |
| 4. | ಮಹದೇವಪುರ | 46334 |
| 5. | ಬೊಮ್ಮನಹಳ್ಳಿ | 38940 |
| 6. | ದಕ್ಷಿಣ | 39566 |
| 7. | ಪೂರ್ವ | 44303 |
| 8. | ಪಶ್ಚಿಮ | 28481 |
| | ಒಟ್ಟು | **309972** |

<table>
<tr>
<td>ಇ)</td>
<td>ಇದುವರೆವಿಗೂ ಎಷ್ಟು ಬೀದಿನಾಯಿಗಳಿಗೆ ಸಂತಾನಹರಣ ಚಿಕಿತ್ಸೆ ಮಾಡಲಾಗಿರುತ್ತದೆ;</td>
<td>ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ಈ ತಹಲ್‌ವರೆವಿಗೂ ಬೀದಿನಾಯಿಗಳಿಗೆ ಸಂತಾನಹರಣ ಚಿಕಿತ್ಸೆ ಮಾಡಲಾಗಿರುವ ವಿವರಗಳು ಈ ಕೆಳಕಂಡಂತೆ ಇರುತ್ತದೆ.
<table>
<tr><th>ಕ್ರ.ಸಂ.</th><th>ಅವಧಿ</th><th>ಶಸ್ತ್ರಚಿಕಿತ್ಸೆ ಮಾಡಲಾದ ಬೀದಿ ನಾಯಿಗಳ ಸಂಖ್ಯೆ</th></tr>
<tr><td>1.</td><td>2000–01</td><td>9957</td></tr>
<tr><td>2.</td><td>2001–02</td><td>16619</td></tr>
<tr><td>3.</td><td>2002–03</td><td>17319</td></tr>
<tr><td>4.</td><td>2003–04</td><td>30582</td></tr>
<tr><td>5.</td><td>2004–05</td><td>32907</td></tr>
<tr><td>6.</td><td>2005–06</td><td>35168</td></tr>
<tr><td>7.</td><td>2006–07</td><td>29017</td></tr>
<tr><td>8.</td><td>2007–08</td><td>52467</td></tr>
<tr><td>9.</td><td>2008–09</td><td>42695</td></tr>
<tr><td>10.</td><td>2009–10</td><td>29349</td></tr>
<tr><td>11.</td><td>2010–11</td><td>69141</td></tr>
<tr><td>12.</td><td>2011–12</td><td>93447</td></tr>
<tr><td>13.</td><td>2012–13</td><td>61667</td></tr>
<tr><td>14.</td><td>2013–14</td><td>52524</td></tr>
<tr><td>15.</td><td>2014–15</td><td>30410</td></tr>
<tr><td>16.</td><td>2015–16</td><td>35261</td></tr>
<tr><td>17.</td><td>2016–17</td><td>8662</td></tr>
<tr><td>18.</td><td>2017–18</td><td>35266</td></tr>
<tr><td>19.</td><td>2018–19</td><td>46151</td></tr>
<tr><td>20.</td><td>2019–2020<br>(ಜನವರಿ-2020ರ ವರೆಗೆ)</td><td>31820</td></tr>
<tr><td colspan="2">ಒಟ್ಟು</td><td>760429</td></tr>
</table>
</td>
</tr>
<tr>
<td>ಈ</td>
<td>ಬೀದಿ ನಾಯಿಗಳ ಹಾವಳಿ ಮತ್ತು ನಿಯಂತ್ರಣಕ್ಕೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು?</td>
<td>ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ಬೀದಿ ನಾಯಿಗಳಿಗೆ ರೇಬೀಸ್ ರೋಗದ ವಿರುದ್ಧ ಎಆರ್‌ವಿ ಲಸಿಕೆಯನ್ನು ಹಾಕಿದ ನಂತರ ಆಯಿಲ್ ಪೈಂಟ್ (Oil Paint)ಅನ್ನು ಬಳಸಿ, ಲಸಿಕೆ ನೀಡಿದ ನಾಯಿಗಳನ್ನು ಗುರುತಿಸಲಾಗುತ್ತದೆ. ಆದರೆ, ಈ ಬಣ್ಣವು ಮೂರರಿಂದ ನಾಲ್ಕು ವಾರಗಳಷ್ಟು ಅವಧಿಗೆ ಮಾತ್ರ ಬಾಳಿಕೆ ಬರುತ್ತಿದ್ದು, ತದನಂತರ ಬಿಸಿಲು ಮಳೆಗೆ ಅಳಿಸಿ ಹೋಗುತ್ತಿರುವುದನ್ನು ಗಮನಿಸಲಾಗಿದ್ದು, ಇದಕ್ಕಾಗಿ ಬೀದಿ ನಾಯಿಗಳ ಕಿವಿಗಳ ಹಂಚಿನಲ್ಲಿ "V" ಆಕಾರದಲ್ಲಿ ಕತ್ತರಿಸಿದ ಗುರುತು ಶಾಶ್ವತವಾಗಿ ಇರುವಂತೆ ಗುರುತಿಸಿ, ಆ ನಾಯಿಗಳಿಗೆ ರೇಬೀಸ್ ರೋಗದ ವಿರುದ್ಧ ಲಸಿಕೆ ಹಾಕಿರುವುದು ಶಾಶ್ವತವಾಗಿ ಕಾಣುವಂತೆ ಮಾಡಲಾಗುತ್ತಿದೆ.</td>
</tr>
</table>

| | | |
|---|---|---|
| | | ಬಿಬಿಎಂಪಿ ವತಿಯಿಂದ ರೇಬೀಸ್ ರೋಗದ ಬಗ್ಗೆ ಜಾಗೃತಿ ಮೂಡಿಸಲು ಈಗಾಗಲೇ ಶಾಲೆಗಳಲ್ಲಿ, ವಾರ್ಡ್ ಮಟ್ಟದ ಸಭೆಗಳಲ್ಲಿ, ಸಾರ್ವಜನಿಕ ಪ್ರಕಟಣೆಗಳ ಮುಖಾಂತರ ಹಾಗೂ ಕರಪತ್ರಗಳನ್ನು ಹಂಚುವ ಮೂಲಕ ಜಾಗೃತಿ ಮೂಡಿಸುವ ಕಾರ್ಯಕ್ರಮ ನಿರಂತರವಾಗಿ ಚಾಲ್ತಿಯಲ್ಲಿರುತ್ತದೆ. |

**ಸಂಖ್ಯೆ: ನಅಇ 35 ಎಂಎನ್‌ವೈ 2020**

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್. ಯಡಿಯೂರಪ್ಪ.)

ಮುಖ್ಯಮಂತ್ರಿ